# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 623

ಸದಸ್ಯರ ಹೆಸರು : ಶ್ರೀ. ಎಂ.ನಾರಾಯಣ ಸ್ವಾಮಿ

ಉತ್ತರಿಸಬೇಕಾದ ದಿನಾಂಕ : 16.09.2021.

ಉತ್ತರಿಸುವ ಸಚಿವರು : ಗೃಹ ಸಚಿವರು.

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಯಾವ ಯಾವ ಗಣ್ಯವ್ಯಕ್ತಿಗಳಿಗೆ ಜೀರೋ ಟ್ರಾಫಿಕ್ ವ್ಯವಸ್ಥೆಯನ್ನು ನೀಡಲಾಗುತ್ತದೆ ; (ಸಂಪೂರ್ಣ ಮಾಹಿತಿಯನ್ನು ನೀಡುವುದು) | ಗಣ್ಯ, ಅತೀಗಣ್ಯ ವ್ಯಕ್ತಿಗಳ ಭದ್ರತೆಯ ದೃಷ್ಟಿಯಿಂದ ಗಣ್ಯ ವ್ಯಕ್ತಿಗಳ ಭದ್ರತಾ ವಿಭಾಗವು ನೀಡುವ ಸೂಚನೆಗಳನ್ವಯ ತಡೆ ರಹಿತ ಸುಗಮ ಸಂಚಾರ ವ್ಯವಸ್ಥೆಯನ್ನು ಒಳಗೊಂಡಂತೆ ಹಲವಾರು ಸುರಕ್ಷತಾ ಕ್ರಮಗಳನ್ನು ತೆಗೆದುಕೊಳ್ಳಲಾಗುತ್ತದೆ.<br>ಸುರಕ್ಷತೆ ದೃಷ್ಟಿಯಿಂದ ಹೆಚ್ಚಿನ ವಿವರಗಳನ್ನು ನೀಡಲಾಗುವುದಿಲ್ಲ. |
| ಆ | ಸಚಿವರಾಗುವ ಮೊದಲೇ ಶಾಸಕರಿಗೆ ಕೆಂಪೇಗೌಡ ಅಂತರ ರಾಷ್ಟ್ರೀಯ ವಿಮಾನ ನಿಲ್ದಾಣದಿಂದ ರಾಜಭವನಕ್ಕೆ ಜೀರೋ ಟ್ರಾಫಿಕ್‌ನಲ್ಲಿ ಬಂದಿದ್ದು, ನಿಯಮ ಉಲ್ಲಂಘನೆ ಅಲ್ಲವೇ ; | ದಿನಾಂಕ:04.08.2021 ರಂದು ನಿಪ್ಪಾಣಿ ಕ್ಷೇತ್ರದ ಶಾಸಕರಾದ ಶ್ರೀಮತಿ ಶಶಿಕಲಾ ಜೊಲ್ಲೆರವರು ಪ್ರಮಾಣ ವಚನ ಸ್ವೀಕರಿಸಬೇಕಿದ್ದ ಮಂತ್ರಿಗಳ ಯಾದಿಯಲ್ಲಿದ್ದು, ಮಾನ್ಯ ರಾಜ್ಯಪಾಲರು ಪ್ರಮಾಣ ವಚನ ಬೋಧಿಸುತ್ತಿದ್ದ ಸಮಾರಂಭವಾಗಿರುವುದರಿಂದ ಪ್ರಮಾಣ ವಚನ ಸ್ವೀಕರಿಸಲು ಸಮಯಕ್ಕೆ ಸರಿಯಾಗಿ ಬರಬೇಕಿದ್ದರಿಂದ ಹಿರಿಯ ಅಧಿಕಾರಿಗಳ ಗಮನಕ್ಕೆ ತಂದು, ಶ್ರೀಮತಿ ಶಶಿಕಲಾ ಜೊಲ್ಲೆ ರವರಿಗೆ ಸಂಚಾರಕ್ಕೆ ಜಂಕ್ಷನ್‌ಗಳಲ್ಲಿ ತೊಂದರೆಯಾಗದಂತೆ ಸಂಚಾರ ವ್ಯವಸ್ಥೆಯನ್ನು ನೀಡಲಾಗಿತ್ತು. |
| ಇ | ಈ ಘಟನೆಗೆ ಸಹಕರಿಸಿದ ಅಧಿಕಾರಿಗಳ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ ; | ಅನ್ವಯಿಸುವುದಿಲ್ಲ |

| | | |
|---|---|---|
| ಈ | ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಅಧಿಕಾರಿಗಳು/ ಸಿಬ್ಬಂದಿಗಳು ಮಾಜಿ ಸಚಿವರನ್ನು ಸ್ವಾಗತಿಸಲು ತೆರಳಲು ಸೂಚಿಸಿದ್ದವರು ಯಾರು ; ಈ ಎಲ್ಲಾ ಅಧಿಕಾರಿಗಳ ವಿರುದ್ಧ ಯಾವ ಯಾವ ಕ್ರಮವನ್ನು ಸರ್ಕಾರ ಜರುಗಿಸಲಾಗಿದೆ ; | ಅನ್ವಯಿಸುವುದಿಲ್ಲ |
| ಉ | 2019ರಲ್ಲಿ 17 ಜನ ಅನರ್ಹ ಶಾಸಕರನ್ನು ವಿಧಾನಸೌಧಕ್ಕೆ ಕರೆತರಲು ಜೀರೋ ಟ್ರಾಫಿಕ್‌ನಲ್ಲಿ ಕರೆ ತಂದ ಪ್ರಕರಣದ ವಿರುದ್ಧ ಸರ್ಕಾರ ಯಾವ ಕ್ರಮ ಕೈಗೊಳ್ಳಲಾಗಿದೆ ? | ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನದ ಅನುಸಾರವಾಗಿ ಭದ್ರತೆಯ ದೃಷ್ಟಿಯಿಂದ 2019ರಲ್ಲಿ 17 ಶಾಸಕರಿಗೆ ಸೂಕ್ತ ಸಂಚಾರ ವ್ಯವಸ್ಥೆಯನ್ನು ಮಾಡಲಾಗಿರುತ್ತದೆ. ಈ ಸಂಧರ್ಭಗಳಲ್ಲಿ ಯಾವುದೇ ನಿಯಮಗಳ ಉಲ್ಲಂಘನೆ ಆಗಿರುವುದಿಲ್ಲ. |

ಹೆಚ್ ಡಿ 90 ಎಸ್‌ಎಸ್‌ಟಿ 2021

(ಅರಗ ಜ್ಞಾನೇಂದ್ರ)
ಗೃಹ ಸಚಿವರು